ಕರ್ನಾಟಕ ವಿಧಾನ ಪರಿಷತ್ತು

143 ನೇ ಅಧಿವೇಶನ 2021

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1495 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಎಸ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 17-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು |

| ಕ್ರ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಲೋಕೋಪಯೋಗಿ ಇಲಾಖೆಯ ವತಿಯಿಂದ ಲೆಕ್ಕ ಶೀರ್ಷಿಕೆ ಎಸ್.ಹೆಚ್.ಡಿ.ಪಿ. ಪ್ಯಾಕೇಜ್ 329ಎ2, ಬಿ ಮತ್ತು ಸಿ ಯೋಜನೆಯಡಿ ನಾಗಮಂಗಲ ತಾಲ್ಲೂಕಿನ ಮಂಡ್ಯ- ನಾಗಮಂಗಲ, ಕೋಳಾಲ-ತುರುವೆಕೆರೆ-ದಬ್ಬೇಘಟ್ಟ, ಬೆಳ್ಳೂರಿ – ಹೊನ್ನೇನಹಳ್ಳಿ ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಒಟ್ಟು ಪ್ಯಾಕೇಜ್ ಮೊತ್ತ ರೂ. 2940 ಲಕ್ಷಗಳು ಮಂಜೂರಾಗಿದ್ದು, ಸದರಿ ಕಾಮಗಾರಿ ಪೂರ್ಣಗೊಳಿಸಬೇಕಾದ ಸಮಯ ಮುಗಿದಿದ್ದರೂ ಸಹ ಇನ್ನೂ ಕಾಮಗಾರಿ ಪೂರ್ಣಗೊಳಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ.<br>ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯಡಿ ಹಂತ-4 (ಘಟ್ಟ-1) ರ ಪ್ಯಾಕೇಜ್ 329 ರಡಿ ನಾಗಮಂಗಲ ತಾಲ್ಲೂಕು ವ್ಯಾಪ್ತಿಗೆ ಬರುವ (ಎ) ಮಂಡ್ಯ ನಾಗಮಂಗಲ ರಸ್ತೆ (ಜಿ.ಮು.ರ) ಸರಪಳಿ 0.0 ಕಿ.ಮೀ ರಿಂದ 36.0 ಕಿ.ಮೀವರೆಗೆ (ಆಯ್ದ ಭಾಗಗಳು) ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿ (ಬಿ) ಕೋಲಾಳ-ತುರುವೆಕೆರೆ-ದಬ್ಬೆಘಟ್ಟ (ಜಿಲ್ಲಾ ಮುಖ್ಯರಸ್ತೆ) ಸರಪಳಿ 0.00 ಕಿ.ಮೀ ರಿಂದ 54.00 ಕಿ.ಮೀವರೆಗೆ (ಆಯ್ದ ಭಾಗಗಳು) ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ (ಸಿ) ಬೆಳ್ಳೂರು ಹೊನ್ನೇನಹಳ್ಳಿ (ಜಿ.ಮು.ರ) ಸರಪಳಿ 0.00 ಕಿ.ಮೀ ರಿಂದ 10.73 ಕಿ.ಮೀವರೆಗೆ (ಆಯ್ದ ಭಾಗಗಳು) ವರೆಗೆ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ರೂ 2940 ಲಕ್ಷ ಅಂದಾಜು ಮೊತ್ತದಲ್ಲಿ ಅಭಿವೃದ್ಧಿಪಡಿಸಲು ಯೋಜಿಸಲಾಗಿರುತ್ತದೆ.<br>ಪ್ಯಾಕೇಜ್ 329 ರಲ್ಲಿ ನಾಗಮಂಗಲ ತಾಲ್ಲೂಕು ವ್ಯಾಪ್ತಿಗೆ ಬರುವ ಒಟ್ಟು 3 ರಸ್ತೆಗಳನ್ನು ಅಭಿವೃದ್ಧಿಪಡಿಸಲು ಯೋಜಿಸಲಾಗಿದ್ದು, ಸದರಿ ಕಾಮಗಾರಿಯನ್ನು ಗುತ್ತಿಗೆದಾರರಾದ ಶ್ರೀ ಹೆಚ್. ಬಿ. ರವಿಕುಮಾರ್‌ರವರಿಗೆ ಟೆಂಡರ್ ಮೂಲಕ ವಹಿಸಲಾಗಿದೆ. ಗುತ್ತಿಗೆ ಕರಾರಿನನ್ವಯ ಗುತ್ತಿಗೆದಾರರಿಗೆ ಒಟ್ಟು 11 ತಿಂಗಳ ಕಾಲಾವಧಿಯನ್ನು ನಿಗಧಿಪಡಿಸಿದ್ದು, ದಿನಾಂಕ 11-06-2020 ರೊಳಗೆ ಪೂರ್ಣಗೊಳಿಸಬೇಕಾಗಿತ್ತು. ಆದರೆ ಒಟ್ಟು 36.26 ಕಿ.ಮೀ ಉದ್ದದ ಅಭಿವೃದ್ಧಿಯ ಎದುರುಇದುವರೆವಿಗೂ 15.13 ಕಿ.ಮೀ ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿರುತ್ತದೆ. ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| ಆ) | ಸದರಿ ಕಾಮಗಾರಿ ಕಳಪೆ ಗುಣಮಟ್ಟದಿಂದ ಕೂಡಿದ್ದು ಅಂದಾಜು ಪಟ್ಟಿಯಲ್ಲಿರುವಂತೆ ಕಾಮಗಾರಿ ಪೂರೈಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಗುಣಮಟ್ಟ ಪರಿಶೀಲಿಸಲು | ಕಾಮಗಾರಿಯಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳಲು MoRTH ($5^{th}$ Revision) ರಲ್ಲಿ ನಿಗಧಿತ ಆವರ್ತನದನ್ವಯ ಪ್ರತಿ ಹಂತದಲ್ಲಿಯೂ ರಸ್ತೆಯ ಪದರಗಳನ್ನು ಪರೀಕ್ಷೆಗಳನ್ನು ಗುತ್ತಿಗೆದಾರರು ಕೈಗೊಂಡಿರುತ್ತಾರೆ. ಅಲ್ಲದೇ, ಸದರಿ ಕಾಮಗಾರಿಗಳ ಗುಣಮಟ್ಟವನ್ನು 3ನೇ ವ್ಯಕ್ತಿಯಾಗಿ |

| | | |
|---|---|---|
| | ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಕಾಮಗಾರಿಯ ಯೋಜನಾ ಸಮಾಲೋಚಕರಾದ ಮೆ:: ಕೌಶಿಕ್ ಕನ್‌ಸಲ್‌ಟೆಂಟ್ಸ್, ಮೈಸೂರುರವರು ಪರೀಕ್ಷೆಗಳನ್ನು ಕೈಗೊಂಡು ತೃಪ್ತಿಕರವಾಗಿರುತ್ತದೆಂದು ದೃಡೀಕರಿಸಿರುತ್ತಾರೆ. |
| ಇ) | ಮೇಲ್ಕಂಡ ಪ್ಯಾಕೇಜ್‌ನಲ್ಲಿ ರೂ. 1800 ಲಕ್ಷ ಎರಡನೇ ಹಂತದ ಕಾಮಗಾರಿ ಇದುವರೆವಿಗೂ ಪ್ರಾರಂಭವಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; ಕಳಪೆ ಕಾಮಗಾರಿ ಹಾಗೂ ವಿಳಂಬಕ್ಕೆ ಕಾರಣರಾದ ಗುತ್ತಿಗೆದಾರರು ಮತ್ತು ಇಲಾಖಾ ಅಧಿಕಾರಿಗಳ ವಿರುದ್ಧ ಯಾವ ಶಿಸ್ತು ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಪ್ಯಾಕೇಜ್ 329 (ಬಿ) ರಲ್ಲಿನ ಕೋಲಾಳ-ತುರುವೇಕೆರೆ-ದಬ್ಬೆಘಟ್ಟ (ಜಿಲ್ಲಾ ಮುಖ್ಯ ರಸ್ತೆ) ಸರಪಳಿ 0.00 ಕಿ.ಮೀ ರಿಂದ 54.00 ಕಿ.ಮೀ ವರೆಗೆ (ಆಯ್ದ ಭಾಗಗಳು) ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ರೂ. 1800 ಲಕ್ಷಗಳ ಮೊತ್ತಕ್ಕೆ ಅಭಿವೃದ್ಧಿಪಡಿಸಲು ಯೋಜಿಸಲಾಗಿದ್ದು, ಇದುವರೆವಿಗೂ ಕಾಮಗಾರಿ ಪ್ರಾರಂಭವಾಗದಿರುವುದು ಸಕಾರದ ಗಮನಕ್ಕೆ ಬಂದಿರುತ್ತದೆ.<br>ಕೋವಿಡ್-19 ರ ಲಾಕ್‌ಡೌನ್ ಪರಿಣಾಮದಿಂದಾಗಿ ಕಾಮಗಾರಿಗಳು ವಿಳಂಬವಾಗಿದ್ದು, ಕಾಲಾವಧಿ ವಿಸ್ತರಣೆ ನೀಡಬೇಕಾಗಿರುತ್ತದೆ. ಗುತ್ತಿಗೆದಾರರು ವಿಸ್ತರಿತ ಕಾಲಾವಧಿಯಲ್ಲಿಯೂ ಕಾಮಗಾರಿ ಪೂರ್ಣಗೊಳಿಸದೇ ಇದ್ದಲ್ಲಿ ಗುತ್ತಿಗೆ ಕರಾರಿನ ವಿಧಿ 49 ರನ್ವಯ ಕ್ರಮ ಕೈಗೊಳ್ಳಲಾಗುವುದು. ಸಂಬಂಧಿಸಿದ ಇಲಾಖೆಯ ಇಂಜಿನಿಯರ್‌ಗಳ ಸಮ್ಮುಖದಲ್ಲಿ ಕಾಮಗಾರಿ ಗುಣಮಟ್ಟವನ್ನು ಪರೀಕ್ಷಿಸಿ ನಿರ್ವಹಿಸಲಾಗುತ್ತಿದೆ. 3ನೇ ವ್ಯಕಿಯಿಂದಲೂ ಕಾಮಗಾರಿಯ ಗುಣಮಟ್ಟವನ್ನು ದೃಡೀಕರಿಸಿಕೊಂಡು ಕಾಮಗಾರಿಯನ್ನು ನಿರ್ವಹಿಸುತ್ತಿರುವುದರಿಂದ ಕಾಮಗಾರಿಯು ಗುಣಮಟ್ಟದಿಂದ ಕೂಡಿರುತ್ತದೆ. |
| ಈ) | ಕಾಮಗಾರಿ ವಿಳಂಬದಿಂದ ಸುತ್ತಮುತ್ತಲಿನ ಸಾರ್ವಜನಿಕರಿಗೆ ದಿನನಿತ್ಯ ತಾಲ್ಲೂಕು ಕೇಂದ್ರಕ್ಕೆ ಓಡಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾಮಗಾರಿಯನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು; (ವಿವರ ನೀಡುವುದು) | ಕಾಮಗಾರಿಯನ್ನು ಮೇ 2021 ರ ಅಂತ್ಯದೊಳಗಾಗಿ ಪೂರ್ಣಗೊಳಿಸಲಾಗುವುದು. |

ಸಂಖ್ಯೆ: ಲೋಇ E- 104 ಇಎಪಿ 2021

**(ಗೋವಿಂದ ಎಂ. ಕಾರಜೋಳ)**
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಸಚಿವರು